ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ವಿಧಾನಪರಿಷತ್ ಸದಸ್ಯರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 109 |
| ಉತ್ತರಿಸಬೇಕಾದ ದಿನಾಂಕ | : | 15.07.2019 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬ್ಯಾಂಕ್ ಸಾಲದ ನೋಟಿಸಿನಿಂದ ರೈತರು ಹೆದರಿ ಆತ್ಮಹತ್ಯೆಗೆ ಒಳಗಾಗುವುದನ್ನು ನಿಲ್ಲಿಸಲು ಕೇರಳ ಸರ್ಕಾರದ ಮಾದರಿಯಂತೆ "ಖಾಯಂ ಪರಿಹಾರ ಆಯೋಗ" ವನ್ನು ರಚಿಸುವ ಉದ್ದೇಶ ಸರ್ಕಾರಕ್ಕಿದೆಯೇ: | ಹೌದು. 2019-20ನೇ ಸಾಲಿನ ಆಯವ್ಯಯದಲ್ಲಿ ಈ ಬಗ್ಗೆ ಘೋಷಣೆ ಮಾಡಲಾಗಿದೆ. |
| ಆ) | ರೈತರು ಸಾಲಕ್ಕಿಂತ ಬಡ್ಡಿಯನ್ನು ಹೆಚ್ಚಾಗಿ ಪಾವತಿಸಿ ಸಂಕಷ್ಟಕ್ಕೆ ಒಳಗಾದಾಗ ಬರದಿಂದ ಸಾಲ ಪಾವತಿ ಸಾಧ್ಯವಾಗದ ಸ್ಥಿತಿ ಎದುರಾದಾಗ ರೈತರು ಋಣ ಪರಿಹಾರ ಆಯೋಗವನ್ನು ಸಂಪರ್ಕಿಸಬಹುದೇ: | ಈ ಕುರಿತು **"ಕರ್ನಾಟಕ ರಾಜ್ಯ ರೈತ ಋಣ ಪರಿಹಾರ ಆಯೋಗ -2019"** ರ ಕರಡು ಅಧಿನಿಯಮ ಹಾಗೂ ರೂಪು ರೇಷೆಗಳನ್ನು ಸಿದ್ದಪಡಿಸುತ್ತಿದ್ದು, ಅತಿವೃಷ್ಟಿ / ಅನಾವೃಷ್ಟಿಯಂತಹ ಪ್ರಕೃತಿ ವಿಕೋಪಕ್ಕೆ ಸಿಲುಕಿ ಬೆಳೆ ನಷ್ಟವಾದಲ್ಲಿ ಸಹಕಾರ ಸಂಘಗಳಿಂದ ಸಾಲ ಪಡೆದ ರೈತರು ಈ ಆಯೋಗಕ್ಕೆ ಪರಿಹಾರಕ್ಕಾಗಿ ಮನವಿ ಮಾಡಲು ಅವಕಾಶ ಕಲ್ಪಿಸಲು ಕ್ರಮವಹಿಸಲಾಗುತ್ತಿದೆ. |
| ಇ) | ಈ ಆಯೋಗವನ್ನು ರಚಿಸಲು ಸರ್ಕಾರ ಮುಂದಾದಲ್ಲಿ ಇದನ್ನು ಯಾವಾಗ ಹಾಗೂ ಇದರಿಂದ ರೈತಾಪಿ ಜನಾಂಗಕ್ಕೆ ಒದಗಿಸುವ ಅನುಕೂಲತೆಗಳೇನು? (ವಿವರವಾದ ಮಾಹಿತಿ ನೀಡುವುದು) | ಸರ್ಕಾರವು 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಋಣ ಪರಿಹಾರ ಆಯೋಗವನ್ನು ರಚಿಸುವ ಕುರಿತು ಮಾನ್ಯ ಸಹಕಾರ ಸಚಿವರ ನೇತೃತ್ವದಲ್ಲಿ ಸಹಕಾರ ಸಂಘಗಳ ನಿಬಂಧಕರು ಹಾಗೂ ಇಲಾಖಾಧಿಕಾರಿಗಳು ಕೇರಳ ರಾಜ್ಯಕ್ಕೆ ಅಧ್ಯಯನ ಪ್ರವಾಸ ಕೈಗೊಂಡು, ಕೇರಳ ರಾಜ್ಯದಲ್ಲಿ ಜಾರಿಯಲ್ಲಿರುವ **"ಋಣ ಪರಿಹಾರ ಆಯೋಗ"**ದ ಬಗ್ಗೆ ಅಧ್ಯಯನ ನಡೆಸಿ ವರದಿಯನ್ನು ತಯಾರಿಸಿದ್ದು, ಇದು ಪರಿಶೀಲನೆಯ ಹಂತದಲ್ಲಿರುತ್ತದೆ. ಇದನ್ನು 2019-20ನೇ ಸಾಲಿನಲ್ಲಿ ಜಾರಿಗೆ ತರಲು ಆಯೋಗ ರಚಿಸಿದ ನಂತರ ವಿವರ ಸಲ್ಲಿಸಲಾಗುವುದು. |

**ಸಿಒ 29 ಸಿಎಲ್ಎಸ್ 2019**

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು